# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 734
ಸದಸ್ಯರ ಹೆಸರು : ಶ್ರೀ ಕೆ.ಟಿ.ಶ್ರೀಕಂಠೇಗೌಡ
ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು
ಉತ್ತರಿಸುವ ದಿನಾಂಕ : 17.09.2021.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಸರ್ಕಾರಿ ಬಸ್ ನಿಲ್ದಾಣಗಳ ಸಂಖ್ಯೆ ಎಷ್ಟು; (ವಿವರ ನೀಡುವುದು) | ರಾಜ್ಯದಲ್ಲಿನ ಸಾರಿಗೆ ಸಂಸ್ಥೆಗಳಲ್ಲಿನ ಬಸ್ ನಿಲ್ದಾಣಗಳ ವಿವರ ಈ ಕೆಳಕಂಡಂತಿದೆ:<br><br>ನಿಗಮ — ಬಸ್ ನಿಲ್ದಾಣಗಳ ಸಂಖ್ಯೆ<br>ಕ.ರಾ.ರ.ಸಾ.ನಿಗಮ — 166<br>ಬೆಂ.ಮ.ಸಾ.ಸಂಸ್ಥೆ — 48<br>ವಾ.ಕ.ರ.ಸಾ.ಸಂಸ್ಥೆ — 179<br>ಈ.ಕ.ರ.ಸಾ.ಸಂಸ್ಥೆ — 154<br>ಒಟ್ಟು — **547**<br><br>ವಿವರಗಳನ್ನು **ಅನುಬಂಧ** ದಲ್ಲಿ ನೀಡಲಾಗಿದೆ. |
| ಆ. | ಈ ಬಸ್ ನಿಲ್ದಾಣಗಳಲ್ಲಿ ಮಹಿಳೆಯರ ವಿಶ್ರಾಂತಿ ಗೃಹಗಳನ್ನು ನಿರ್ಮಿಸಲಾಗಿದೆಯೇ; | ಬಸ್ ನಿಲ್ದಾಣಗಳಲ್ಲಿ ಮಹಿಳೆಯರ ವಿಶ್ರಾಂತಿ ಗೃಹಗಳನ್ನು ನಿರ್ಮಿಸಲಾಗಿರುವ ಹಾಗೂ ನಿರ್ಮಿಸಲು ಕೈಗೊಂಡ ಕ್ರಮದ ವಿವರ ಈ ಕೆಳಕಂಡಂತಿದೆ:<br><br><u>ಕ.ರಾ.ರ.ಸಾ.ನಿಗಮ:-</u> |
| ಇ. | ಇಲ್ಲವಾದಲ್ಲಿ, ನಿರ್ಮಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರ ಒದಗಿಸುವುದು) | ನಿಗಮದ ವ್ಯಾಪ್ತಿಯಲ್ಲಿನ ಒಟ್ಟು 166 ಬಸ್ ನಿಲ್ದಾಣಗಳಿದ್ದು, ಅವುಗಳಲ್ಲಿ 99 ಬಸ್ ನಿಲ್ದಾಣಗಳಲ್ಲಿ ಮಹಿಳಾ ವಿಶ್ರಾಂತಿ ಗೃಹಗಳನ್ನು ನಿರ್ಮಿಸಲಾಗಿದೆ. ಪ್ರಸ್ತುತ ಕೋವಿಡ್-19ರ ಸಾಂಕ್ರಾಮಿಕ ರೋಗದಿಂದಾಗಿ ನಿಗಮವು ತೀವ್ರ ಆರ್ಥಿಕ ಸಂಕಷ್ಟದಲ್ಲಿದ್ದು, ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ತುಂಬಾ ಕಷ್ಟಕರವಾಗಿರುವುದರಿಂದ, ಬಾಕಿ ಉಳಿದ 67 ಬಸ್ ನಿಲ್ದಾಣಗಳಲ್ಲಿ ಮಹಿಳೆಯರ ವಿಶ್ರಾಂತಿ ಗೃಹಗಳನ್ನು ಅವಶ್ಯಕತೆಗನುಗುಣವಾಗಿ ನಿಗಮದ ಆರ್ಥಿಕ ಪರಿಸ್ಥಿತಿಯನ್ನು ಆಧರಿಸಿ ಹಂತ ಹಂತವಾಗಿ ನಿರ್ಮಿಸಲು ಕ್ರಮ ಜರುಗಿಸಲಾಗುವುದು.<br><br><u>ಬೆಂ.ಮ.ಸಾ.ಸಂಸ್ಥೆ</u><br><br>ಸಂಸ್ಥೆಯ ವ್ಯಾಪ್ತಿಯಲ್ಲಿನ ಒಟ್ಟು 48 ಬಸ್ ನಿಲ್ದಾಣಗಳಿದ್ದು, ಅವುಗಳಲ್ಲಿ 14 ಬಸ್ ಟಿಟಿಎಂಸಿ/ ನಿಲ್ದಾಣಗಳಲ್ಲಿ ಮಹಿಳಾ ವಿಶ್ರಾಂತಿ ಗೃಹಗಳನ್ನು ನಿರ್ಮಿಸಲಾಗಿರುತ್ತದೆ ಹಾಗೂ 04 ಬಸ್ ನಿಲ್ದಾಣಗಳಲ್ಲಿ |

| | | |
|---|---|---|
| | | ಮಹಿಳಾ ವಿಶ್ರಾಂತಿ ಗೃಹಗಳನ್ನು ನಿರ್ಮಿಸುವ ಕಾರ್ಯವು ಪ್ರಗತಿಯಲ್ಲಿರುತ್ತದೆ. ಉಳಿದ 30 ಬಸ್ ನಿಲ್ದಾಣಗಳಲ್ಲಿ ಸ್ಥಳಾವಕಾಶ ಮತ್ತು ಆರ್ಥಿಕ ಸಂಪನ್ಮೂಲಗಳ ಲಭ್ಯತೆ ಆಧರಿಸಿ ಮಹಿಳಾ ವಿಶ್ರಾಂತಿ ಗೃಹಗಳನ್ನು ಹಂತ ಹಂತವಾಗಿ ನಿರ್ಮಿಸಲು ಕ್ರಮ ಕೈಗೊಳ್ಳಲಾಗುವುದು.<br><br>**<u>ವಾ.ಕ.ರ.ಸಾ.ಸಂಸ್ಥೆ:</u>**<br><br>ಸಂಸ್ಥೆ ವ್ಯಾಪ್ತಿಯಲ್ಲಿನ ಒಟ್ಟು 179 ಬಸ್ ನಿಲ್ದಾಣಗಳಿದ್ದು, ಅವುಗಳಲ್ಲಿ 157 ಬಸ್ ನಿಲ್ದಾಣಗಳಲ್ಲಿ ಮಹಿಳಾ ವಿಶ್ರಾಂತಿ ಗೃಹಗಳನ್ನು ನಿರ್ಮಿಸಲಾಗಿದೆ. ಬಾಕಿ ಉಳಿದ 22 ಬಸ್ ನಿಲ್ದಾಣಗಳು ಗ್ರಾಮಗಳಲ್ಲಿರುವ ಚಿಕ್ಕ ಬಸ್ ನಿಲ್ದಾಣಗಳಾಗಿರುತ್ತವೆ. ಅಲ್ಲಿ ಅವಶ್ಯತೆಗೆ ಅನುಗುಣವಾಗಿ ಹೊಸ ಬಸ್ ನಿಲ್ದಾಣ ನಿರ್ಮಿಸುವ ಸಮಯದಲ್ಲಿ ಮಹಿಳಾ ವಿಶ್ರಾಂತಿ ಗೃಹಗಳನ್ನು ನಿರ್ಮಿಸಲು ಅವಕಾಶ ಕಲ್ಪಿಸಲಾಗುವುದು<br><br>**<u>ಕ.ಕ.ರ.ಸಾ.ನಿಗಮ</u>**<br><br>ನಿಗಮದ ವ್ಯಾಪ್ತಿಯಲ್ಲಿನ ಒಟ್ಟು 154 ಬಸ್ ನಿಲ್ದಾಣಗಳಿದ್ದು, ಅವುಗಳಲ್ಲಿ 123 ಬಸ್ ನಿಲ್ದಾಣಗಳಲ್ಲಿ ಮಹಿಳಾ ವಿಶ್ರಾಂತಿ ಗೃಹಗಳನ್ನು ನಿರ್ಮಿಸಲಾಗಿದೆ. ಬಾಕಿ ಉಳಿದ 31 ಬಸ್ ನಿಲ್ದಾಣಗಳಲ್ಲಿ ಅನುದಾನದ ಲಭ್ಯತೆ ಮತ್ತು ಸ್ಥಳದ ಲಭ್ಯತೆಯನುಸಾರ ಹಂತಹಂತವಾಗಿ ಮಹಿಳಾ ವಿಶ್ರಾಂತಿ ಗೃಹಗಳನ್ನು ನಿರ್ಮಿಸಲು ಕ್ರಮ ಕೈಗೊಳ್ಳಲಾಗುವುದು. |
| ಈ. | ಈ ಬಸ್ ನಿಲ್ದಾಣಗಳಲ್ಲಿ ಶೌಚಾಲಯಗಳ ಸಮರ್ಪಕ ನಿರ್ವಹಣೆಗೆ ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ಒದಗಿಸುವುದು) | ಸಾರಿಗೆ ಸಂಸ್ಥೆಗಳ ಬಸ್ ನಿಲ್ದಾಣಗಳಲ್ಲಿನ ಶೌಚಾಲಯಗಳ ಸ್ವಚ್ಚತಾ ಕಾರ್ಯವನ್ನು ಈ ಕೆಳಕಂಡಂತೆ ಕ್ರಮ ವಹಿಸುವ ಮೂಲಕ ನಿರ್ವಹಿಸಲಾಗುತ್ತಿದೆ:<br><br>**<u>ಕ.ರಾ.ರ.ಸಾ.ನಿಗಮ:-</u>**<br><br>• ಕ.ರಾ.ರ.ಸಾ. ನಿಗಮದ ವ್ಯಾಪ್ತಿಯಲ್ಲಿ ಒಟ್ಟು 17 ವಿಭಾಗಗಳಿದ್ದು, ಸದರಿ ವಿಭಾಗಗಳ ಅಡಿಯಲ್ಲಿ ಬರುವ ಬಸ್ ನಿಲ್ದಾಣಗಳ ಆವರಣ ಮತ್ತು ಶೌಚಾಲಯ / ಮೂತ್ರಾಲಯಗಳ ಸ್ವಚ್ಚತಾ ನಿರ್ವಹಣೆಗೆ ವಿಭಾಗವಾರು ಸ್ವಚ್ಚತಾ ಗುತ್ತಿಗೆದಾರರನ್ನು ಟೆಂಡರ್ ಮೂಲಕ ಆಯ್ಕೆ ಮಾಡುವ ಪದ್ಧತಿ ಚಾಲ್ತಿಯಲ್ಲಿರುತ್ತದೆ.<br>• ಆಯ್ಕೆಯಾದ ಗುತ್ತಿಗೆದಾರರೊಂದಿಗೆ ವಿಭಾಗಗಳ ಮಟ್ಟದಲ್ಲಿ ಕರಾರು ಒಪ್ಪಂದ ಮಾಡಿಕೊಂಡು, ಬಸ್ ನಿಲ್ದಾಣಗಳಲ್ಲಿ ಸ್ವಚ್ಚತಾ ಕಾರ್ಯವನ್ನು ಉತ್ತಮವಾಗಿ ನಿರ್ವಹಿಸಲಾಗುತ್ತಿದೆ. ಬಸ್ ನಿಲ್ದಾಣಗಳಲ್ಲಿ ಪುರುಷರಿಗೆ ಮತ್ತು ಮಹಿಳೆಯರಿಗೆ ಪ್ರತ್ಯೇಕ ಶೌಚಾಲಯ ವ್ಯವಸ್ಥೆಯನ್ನು |

| | | |
|---|---|---|
| | | ಕಲ್ಪಿಸಲಾಗಿದೆ. ನಿಗಮದ ಅಧಿಕಾರಿಗಳು ನಿಯಮಿತವಾಗಿ ಬಸ್ ನಿಲ್ದಾಣಗಳಿಗೆ ಭೇಟಿ ನೀಡಿ ಸ್ವಚ್ಛತೆಯ ಮೇಲುಸ್ತುವಾರಿಯನ್ನು ನಿರ್ವಹಿಸುತ್ತಿದ್ದಾರೆ. ಸ್ವಚ್ಛತೆ ಹಾಗೂ ಇತರೆ ಸಮಸ್ಯೆಗಳ ಸಂಬಂಧ ದೂರುಗಳ ಬಗ್ಗೆ ಕ್ರಮವಹಿಸುತ್ತಿದ್ದು, ನ್ಯೂನ್ಯತೆಗಳಿಗೆ ಗುತ್ತಿಗೆದಾರರಿಗೆ ಕರಾರು ನಿಯಮಾವಳಿಗಳನ್ವಯ ಕ್ರಮ ವಹಿಸಲಾಗುತ್ತಿದೆ. ಶೌಚಾಲಯಗಳ ಮುಂಭಾಗದಲ್ಲಿ ಶುಲ್ಕದ ವಿವರಗಳು ಹಾಗೂ ಸಮಸ್ಯೆಗಳ ಸಂಬಂಧ ಸಂಪರ್ಕಿಸಬೇಕಾದ ಮೊಬೈಲ್ ಸಂಖ್ಯೆಯನ್ನು ನಮೂದಿಸಲಾಗಿದೆ.<br><br>**<u>ಬೆಂ.ಮ.ಸಾ.ಸಂಸ್ಥೆ:-</u>**<br>ಪ್ರಸ್ತುತ ಬೆಂ.ಮ.ಸಾ.ಸಂಸ್ಥೆಯಲ್ಲಿ ಒಟ್ಟು 48 ಬಸ್ ನಿಲ್ದಾಣಗಳಿರುತ್ತದೆ. ಅವುಗಳ ಪೈಕಿ 40 ಬಸ್ ನಿಲ್ದಾಣಗಳಲ್ಲಿ ಆವರಣ ಸ್ವಚ್ಛತಾ ಮತ್ತು ಶೌಚಾಲಯಗಳ ಸ್ವಚ್ಛತಾ ನಿರ್ವಹಣೆಯನ್ನು, ಟೆಂಡರ್ ಮೂಲಕ ಆಯ್ಕೆಯಾದ ಅರ್ಹ ಮತ್ತು ಅನುಭವವುಳ್ಳ ಖಾಸಗಿ ಗುತ್ತಿಗೆದಾರರ ಮೂಲಕ ಸಮರ್ಪಕವಾಗಿ ನಿರ್ವಹಿಸಲಾಗುತ್ತಿದೆ. ಗುತ್ತಿಗೆದಾರರು ಸಂಸ್ಥೆಯೊಂದಿಗೆ ಒಳಪಟ್ಟಿರುವ ಕರಾರಿನ ಅನ್ವಯ ಬಸ್ ನಿಲ್ದಾಣ/ಟಿ.ಟಿ.ಎಂ.ಸಿಗಳ ಆವರಣ ಹಾಗೂ ಶೌಚಾಲಯಗಳನ್ನು ದಿನದ 24 ಗಂಟೆಗಳ ಕಾಲ ಸಮರ್ಪಕವಾಗಿ ನಿರ್ವಹಿಸಲಾಗುತ್ತಿದೆ. ಸದರಿ ಗುತ್ತಿಗೆದಾರರು ಸಾರ್ವಜನಿಕ ಪ್ರಯಾಣಿಕರ ತೃಪ್ತಿಗನುಗುಣವಾಗಿ ಸೇವೆಯನ್ನು ಒದಗಿಸಲು ಕ್ರಮ ಕೈಗೊಳ್ಳಲಾಗಿದೆ. ಇದರ ಮೇಲುಸ್ತುವಾರಿಯನ್ನು ನಿಲ್ದಾಣಾಧಿಕಾರಿಗಳಿಗೆ ನೀಡಲಾಗಿರುತ್ತದೆ. ಸಮರ್ಪಕ ಸ್ವಚ್ಛತಾ ಕಾರ್ಯ ನಿರ್ವಹಣೆಯ ಆಧಾರದ ಮೇಲೆ ಪ್ರತಿ ತಿಂಗಳು ಗುತ್ತಿಗೆದಾರರಿಗೆ ಹಣವನ್ನು ಪಾವತಿಸಲಾಗುತ್ತಿದೆ.<br><br>ಉಳಿದ 08 ಚಿಕ್ಕ ಬಸ್ ನಿಲ್ದಾಣಗಳಲ್ಲಿ ಶೌಚಾಲಯಗಳು ಇರುವುದಿಲ್ಲ ಹಾಗೂ ಸದರಿ ಬಸ್ ನಿಲ್ದಾಣದ ಸ್ವಚ್ಛತೆಯನ್ನು ಸ್ಥಳೀಯವಾಗಿ ನಿರ್ವಹಿಸಲಾಗುತ್ತಿದೆ.<br><br>**<u>ವಾ.ಕ.ರ.ಸಾ.ಸಂಸ್ಥೆ:-</u>**<br><br>ಬಸ್ ನಿಲ್ದಾಣಗಳಲ್ಲಿರುವ ಶೌಚಾಲಯಗಳ ಸಮರ್ಪಕ ನಿರ್ವಹಣೆಗೆ ಖಾಸಗಿಯವರನ್ನು ಇ-ಟೆಂಡರ್ ಮೂಲಕ ಆಯ್ಕೆ ಮಾಡಿ ಶಾಸನಾ ಬದ್ಧ ನಿಯಮಾವಳಿಗಳನ್ವಯ ಸ್ವಚ್ಛತಾ ಕಾರ್ಯವನ್ನು ನಿರ್ವಹಿಸುವ ಪದ್ಧತಿ ಜಾರಿಯಲ್ಲಿರುತ್ತದೆ. ಖಾಸಗಿ ಗುತ್ತಿಗೆದಾರರು ಇಲ್ಲದ ಬಸ್ ನಿಲ್ದಾಣಗಳಲ್ಲಿ ಸ್ಥಳೀಯ ವ್ಯವಸ್ಥೆಯಡಿಯಲ್ಲಿ ಸ್ವಚ್ಛತೆಯನ್ನು ನಿರ್ವಹಿಸಲಾಗುತ್ತಿದೆ. ಸಂಸ್ಥೆಯಲ್ಲಿ ಒಟ್ಟು 179 ಬಸ್ ನಿಲ್ದಾಣಗಳಿದ್ದು, 54 ಬಸ್ ನಿಲ್ದಾಣಗಳಲ್ಲಿ ಗುತ್ತಿಗೆ ಆಧಾರದ ಮೇಲೆ, 65 ಬಸ್ |

| | | |
|---|---|---|
| | | ನಿಲ್ದಾಣಗಳಲ್ಲಿ ಸ್ಥಳೀಯ ವ್ಯವಸ್ಥೆಯಡಿಯಲ್ಲಿ, 4 ಬಸ್ ನಿಲ್ದಾಣಗಳಲ್ಲಿ ಕಾಮಗಾರಿ ಕೆಲಸ ಪ್ರಗತಿಯಲ್ಲಿದ್ದು ಇನ್ನುಳಿದ 56 ಬಸ್ ನಿಲ್ದಾಣಗಳಲ್ಲಿ ಸ್ಥಳದ ಅಭಾವದಿಂದ ಶೌಚಾಲಯಗಳನ್ನು ನಿರ್ಮಿಸಲು ಸಾಧ್ಯವಾಗಿರುವುದಿಲ್ಲ.<br><br>ಕ.ಕ.ರ.ಸಾ.ನಿಗಮ:-<br>ನಿರ್ವಹಣೆಗಾಗಿ ಇ-ಟೆಂಡರ್ ಮೂಲಕ ಅರ್ಹ ಮತ್ತು ಅನುಭವಿ ಖಾಸಗಿ ಸ್ವಚ್ಛತಾ ಗುತ್ತಿಗೆದಾರರನ್ನು ಪಾರದರ್ಶಕವಾಗಿ ಆಯ್ಕೆ ಮಾಡಲಾಗುತ್ತಿದೆ.<br><br>• ಸದರಿಯವರು ಸಮರ್ಪಕವಾಗಿ ನಿರ್ವಹಣೆ ಮಾಡುವುದನ್ನು ಹಾಗೂ ಸ್ವಚ್ಛತೆಯನ್ನು ಕಾಪಾಡಿಕೊಳ್ಳುವ ದೃಷ್ಟಿಯಿಂದ ಬಸ್ ನಿಲ್ದಾಣದ ಸಂಬಂಧಿಸಿದ ಅಧಿಕಾರಿಗಳು ನಿರಂತರವಾಗಿ ನಿಗಾವಹಿಸಿ ಕ್ರಮ ಕೈಗೊಳ್ಳಲಾಗುತ್ತಿದೆ.<br>• ಸ್ವಚ್ಛತೆ/ನಿರ್ವಹಣೆಯಲ್ಲಿ ಯಾವುದೇ ವ್ಯತೆಯುಂಟಾದಲ್ಲಿ ಸದರಿ ಪರವಾನಿಗೆದಾರರಿಗೆ ದಂಡ ವಿಧಿಸಲಾಗುತ್ತಿದೆ.<br>• ಮೇಲಿನಂತೆ ಕ್ರಮ ಕೈಗೊಂಡಾಗ್ಯೂ ಸಹ ಸ್ವಚ್ಛತೆ/ನಿರ್ವಹಣೆಯಲ್ಲಿ ವ್ಯತ್ಯಯ ಉಂಟಾದಲ್ಲಿ ಸದರಿ ಗುತ್ತಿಗೆದಾರರ ಪರವಾನಿಗೆಯನ್ನು ರದ್ದತಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ಟಿಡಿ 191 ಟಿಸಿಕ್ಯೂ 2021

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು